# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 490 (778)
2. ಸದಸ್ಯರ ಹೆಸರು : ಶ್ರೀ ಎನ್.ಎಸ್.ಬೋಸ್‌ರಾಜು (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 10-03-2020
4. ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರಗಳು |
|---|---|---|
| ಅ) | ರಾಯಚೂರು ನಗರದ ಒಳಚರಂಡಿ ನಿರ್ಮಾಣದ ಕಾಮಗಾರಿಯನ್ನು ಎಷ್ಟು ಭಾಗ ಪೂರ್ಣಗೊಳಸಲಾಗಿದೆ; ಇದಕ್ಕೆ ಖರ್ಚಾಗಿರುವ ಅನುದಾನ ಎಷ್ಟು; ಬಾಕಿ ಉಳಿದ ಕಾಮಗಾರಿ ಪೂರ್ಣಗೊಳಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಇದಕ್ಕೆ ಬೇಕಾಗಿರುವ ಅನುದಾನ ಎಷ್ಟು? | ಏಷ್ಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿಯಲ್ಲಿ (ಎನ್‌ಕೆಯುಎಸ್‌ಐಪಿ) ರಾಯಚೂರು ನಗರದಲ್ಲಿ ಗುತ್ತಿಗೆ ಕರಾರಿನಂತೆ ಉದ್ದೇಶಿತ 130 ಕಿ.ಮೀ ಒಳಚರಂಡಿ ಕೊಳವೆ ಮಾರ್ಗ ಹಾಗೂ 28 ಎಂಎಲ್‌ಡಿ ಜಲ ತ್ಯಾಜ್ಯ ಶುದ್ಧೀಕರಣ ಘಟಕ ಕಾಮಗಾರಿಗಳನ್ನು ರೂ.93.26 ಕೋಟಿ ವೆಚ್ಚದಲ್ಲಿ ಪೂರ್ಣಗೊಳಸಲಾಗಿದೆ. ಈವರೆಗೆ ರೂ.94.96 ಕೋಟಿಗಳು ಖರ್ಚಾಗಿರುತ್ತದೆ.<br><br>ಈ ಕಾಮಗಾರಿಯಿಂದ ಒಟ್ಟಾರೆ ರಾಯಚೂರು ನಗರದ ಶೇ.30% ರಷ್ಟು ಭಾಗಕ್ಕೆ ಒಳಚರಂಡಿ ಜಾಲ ಒಳಪಡಿಸಿದಂತಾಗಿದೆ.<br><br>ರಾಯಚೂರು ನಗರಕ್ಕೆ 480 ಕಿ.ಮೀ ಒಳಚರಂಡಿ ಕೊಳವೆ ಮಾರ್ಗದ ಅವಶ್ಯಕತೆ ಇದ್ದು, ಕೆ.ಯು.ಐ.ಡಿ.ಎಫ್.ಸಿ ವತಿಯಿಂದ 149 ಕಿ.ಮೀ ಮತ್ತು ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿಯಲ್ಲಿ ಕ.ನ.ನೀ.ಸ ಮತ್ತು ಒ.ಚ ಮಂಡಳ ವತಿಯಿಂದ 162 ಕಿ.ಮೀ ಒಟ್ಟು 311 ಕಿ.ಮೀ ಅಳವಡಿಸಲಾಗುತ್ತಿದೆ. ಒಟ್ಟಾರೆ, ಶೇ.60 ರಷ್ಟು ಭಾಗ ಪೂರ್ಣಗೊಂಡಿರುತ್ತದೆ. ಕ.ನ.ನೀ.ಸ ಮತ್ತು ಒಚ ಮಂಡಳ ವತಿಯಿಂದ ಕೈಗೊಂಡ ಕಾಮಗಾರಿಗಳಗೆ ರೂ.5349.00 ಲಕ್ಷ ಖರ್ಚಾಗಿರುತ್ತದೆ.<br><br>ಬಾಕಿ ಉಳಿದ 169 ಕಿ.ಮೀ. ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲು ಅಂದಾಜು ಪತ್ರಿಕೆ ತಯಾರಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಬಾಕಿ ಕಾಮಗಾರಿಗೆ ಸುಮಾರು ರೂ.125.00 ಕೋಟಿ ಅನುದಾನ ಅವಶ್ಯವಿರುತ್ತದೆ. |
| ಆ) | ರಾಯಚೂರು ನಗರದಲ್ಲಿರುವ ವಿವಿಧ ಬಡಾವಣೆಗಳ ಉದ್ಯಾನವನ ಅಭಿವೃದ್ಧಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ನಗರದ ವಿವಿಧ ಬಡಾವಣೆಗಳಲ್ಲಿ ಕೇಂದ್ರ ಪುರಸ್ಕೃತ **ಅಮೃತ್ ಯೋಜನೆಯ** ಅನುದಾನದಡಿಯಲ್ಲಿ ಪ್ರಸ್ತುತ ರೂ. 3.20 ಕೋಟಿ ಮೊತ್ತದಲ್ಲಿ ಈ ಕೆಳಕಂಡ 07 ಉದ್ಯಾನವನಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ.: |

| ಕ್ರ. ಸಂ. | ಪ್ರಶ್ನೆ | ಉತ್ತರಗಳು |
|---|---|---|
| | | 2) ದೇವರ ಕಾಲೋನಿ ಉದ್ಯಾನವನ (ರೂ. 87.00 ಲಕ್ಷ)<br>3) ಜವಾರ ನಗರ ಉದ್ಯಾನವನ (ರೂ. 25.00 ಲಕ್ಷ)<br>4) ಐ.ಡಿ.ಎಸ್.ಎಮ್.ಟಿ. ಉದ್ಯಾನವನ (ರೂ. 30.00 ಲಕ್ಷ)<br>5) ಬಾಲನಾಗಮ್ಮ ಕಾಲೋನಿ ಉದ್ಯಾನವನ (ರೂ. 30.00 ಲಕ್ಷ)<br>6) ಕಲ್ಯಾಣ ನಗರ ಉದ್ಯಾನವನ (ರೂ. 50.00 ಲಕ್ಷ)<br>7) ಸಾವಿತ್ರಿ ಕಾಲೋನಿ ಉದ್ಯಾನವನ (ರೂ. 30.00 ಲಕ್ಷ)<br>14ನೇ ಹಣಕಾಸು ಅಯೋಗ ಅನುದಾನದಡಿಯಲ್ಲಿ ರಾಯಚೂರು ನಗರದ ವಿವಿಧ ಬಡಾವಣೆಗಳಲ್ಲಿ ರೂ.62.39 ಲಕ್ಷ ಮೊತ್ತದ ಈ ಕೆಳಕಂಡ 7 ಉದ್ಯಾನವನಗಳ ಅಭಿವೃದ್ಧಿ ಕೈಗೊಳ್ಳಲಾಗಿದ್ದು, ಇದರಲ್ಲಿ 6 ಕಾಮಗಾರಿಗಳನ್ನು ಪೂರ್ಣಗೊಳಸಲಾಗಿದೆ ಹಾಗೂ 1 ಕಾಮಗಾರಿಯು ಪ್ರಗತಿಯಲ್ಲಿರುತ್ತವೆ.<br>1) ಶ್ರೀ ಕೃಷ್ಣಸುಧಾಮ್ ಗಾರ್ಡನ್ ವಾಸವಿನಗರ — ಪ್ರಗತಿಯಲ್ಲಿದೆ<br>2) ರಹಮತ್ತ್ ನಗರ್ ಗಾರ್ಡನ್ — ಪೂರ್ಣಗೊಂಡಿದೆ<br>3) ಆಶ್ರಯ ಕಾಲೋನಿ ವಾರ್ಡ್ ನ.28. — ಪೂರ್ಣಗೊಂಡಿದೆ<br>4) ಲಕ್ಷ್ಮಿ ಲೇಔಟ್ ವಾರ್ಡ್ ನ.18 — ಪೂರ್ಣಗೊಂಡಿದೆ<br>5) ದಡ್ಡಿ ಕಾಲೋನಿ ಗಾರ್ಡನ್ — ಪೂರ್ಣಗೊಂಡಿದೆ<br>6) ಆಟೋನಗರ್ ಗಾರ್ಡನ್ — ಪೂರ್ಣಗೊಂಡಿದೆ<br>7) ನಿಸರ್ಗ ಲೇಔಟ್ ಗಾರ್ಡನ್ — ಪೂರ್ಣಗೊಂಡಿದೆ |
| ಇ) | ರಾಯಚೂರು ನಗರದಲ್ಲಿರುವ ಮಾವಿನಕೆರೆ ಅಭಿವೃದ್ಧಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಸದರಿ ಉದ್ಯಾನವನ ಅಭಿವೃದ್ಧಿಗೆ ಖರ್ಚಾಗುವ ಅನುದಾನ ಎಷ್ಟು? | ಏಷ್ಯನ್ ಅಭಿವೃದ್ಧಿ ಬ್ಯಾಂಕ್ ನ ಸಹಾಯ ಧನದ ಎನ್.ಕೆ.ಯು.ಎಸ್.ಐ.ಪಿ. ಯೋಜನೆಯಡಿಯಲ್ಲಿ ಒಟ್ಟು ಮೊತ್ತ ರೂ.2.76 ಕೋಟಿಗಳ ವೆಚ್ಚದಲ್ಲಿ ಮಾವಿನಕೆರೆ (ಆಮ್ ತಲಾವ್) ಅಭಿವೃದ್ಧಿ ಕಾಮಗಾರಿಯನ್ನು ದಿ:19-7-2017 ರಂದು ಪೂರ್ಣಗೊಳಸಲಾಗಿರುತ್ತದೆ.<br>ರಾಯಚೂರು ನಗರಸಭೆಯ ವಿವಿಧ ಅಭಿವೃದ್ಧಿ ಯೋಜನೆಗಳಲ್ಲಿ ಒಟ್ಟು ರೂ.77.98 ಲಕ್ಷಗಳಲ್ಲಿ ಮಾವಿನಕೆರೆ ಅಭಿವೃದ್ಧಿ ಕೈಗೊಂಡು ಪೂರ್ಣಗೊಳಸಿರುವ ಕಾಮಗಾರಿಗಳ ವಿವರಗಳನ್ನು **(ಅನುಬಂಧ-1)**ರಲ್ಲಿ ನೀಡಿದೆ. |

ಕಡತ ಸಂಖ್ಯೆ : ನಅಇ 58 ಪಿ.ಆರ್.ಜೆ 2020

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.

ಅನುಬಂಧ-1

## ಮಾವಿನ ಕೆರೆ ಅಭಿವೃದ್ಧಿಗಾಗಿ ತೆಗೆದುಕೊಂಡ ಕಾಮಗಾರಿಗಳ ವಿವರ.

| ಕ್ರ ಸಂ | ಕಾಮಗಾರಿ ಕೈಗೊಂಡ ವರ್ಷ | ಅನುದಾನದ ವಿವರ | ಕಾಮಗಾರಿಗಳ ವಿವರ | ಮಂಜೂರಾದ ಮೊತ್ತ ರೂ. | ಖರ್ಚಾದ ಮೊತ್ತ ರೂ. | ಷರಾ |
|---|---|---|---|---|---|---|
| 1 | 2007-08 | 12th Finance Untaid Grant | ನಗರದ ಆಮತಲಾಬ್ ಗಾರ್ಡನ್ ಅಭಿವೃದ್ಧಿ ಮಾಡಲು | 2500000 | 2489191 | ಪೂರ್ಣಗೊಂಡಿದೆ. |
| 2 | 2011-12 | Municipal Fund | ಅಮ್‌ತಲಾಬ್ ಗಾರ್ಡನ್‌ನಲ್ಲಿ ದುರಸ್ತಿ ಹಾಗೂ ಕುಡಿಯುವ ನೀರು ವ್ಯವಸ್ಥೆಗಾಗಿ. | 300000 | 297683 | ಪೂರ್ಣಗೊಂಡಿದೆ. |
| 3 | 2011-12 | 13th Finance General Basic Grant | ಆಮತಲಾಬ್ ಕೆರೆಯ ಸುತ್ತಾಲೂ ಎಲ್.ಇ.ಡಿ /ಇಂಡಕ್ಷನ್ ಬೀದಿ ದೀಪಗಳನ್ನು ಅಳವಡಿಸುವ ಕಾಮಗಾರಿ | 450000 | 389206 | ಪೂರ್ಣಗೊಂಡಿದೆ. |
| 4 | 2011-12 | 13th Finance General Basic Grant | ಆಮತಲಾಬ್ ಗಾರ್ಡನದಲ್ಲಿ ಮಕ್ಕಳ ಪಾರ್ಕ್ ನಿರ್ಮಿಸುವುದು. | 1350000 | 1350000 | ಪೂರ್ಣಗೊಂಡಿದೆ. |
| 5 | 2011-12 | | ಆಮತಲಾಬ್ ಗಾರ್ಡನದಲ್ಲಿ ಹತ್ತಿರ ಬೋಟ್ ಜಟ್ಟಿಂಗ್ ನಿರ್ಮಿಸುವುದು. | 1000000 | 1000000 | ಪೂರ್ಣಗೊಂಡಿದೆ. |
| 6 | 2012-13 | SFC | ಮಾವಿನ ಕೆರೆ ಉದ್ಯಾನವನ ಬೋಟಿಂಗ್ ಜೆಟ್ಟಿಂಗ್ ಹಾಗೂ ವಾಟರ್ ಪಾರ್ಕ ಮುಂದುವರೆದ ಕಾಮಗಾರಿ. | 2273000 | 2273000 | ಪೂರ್ಣಗೊಂಡಿದೆ. |

ಒಟ್ಟು = 77.98 ಲಕ್ಷಗಳು

ಪೌರಾಯುಕ್ತರು
ನಗರಸಭೆ ರಾಯಚೂರು